# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1553 |
| ಸದಸ್ಯರ ಹೆಸರು | ಶ್ರೀ ಪ್ರಕಾಶ್ ಕೆ. ರಾಥೋಡ್ (ನಾಮನಿರ್ದೇಶನ ಹೊಂದಿದವರು) |
| ಉತ್ತರಿಸುವ ದಿನಾಂಕ | 11.03.2022 |
| ಉತ್ತರಿಸುವ ಸಚಿವರು | ಕೃಷಿ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಅತಿಯಾದ ರಾಸಾಯನಿಕ ಗೊಬ್ಬರ ಬಳಕೆಯಿಂದ ಕೃಷಿ ಭೂಮಿಯು ಹಾಳಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ರಾಜ್ಯದಲ್ಲಿ ಕೃಷಿ ವಿಶ್ವವಿದ್ಯಾಲಯಗಳ ಸಂಶೋಧನೆ ಮೇರೆಗೆ ಬೆಳೆವಾರು ಮಾಡಿರುವ ಶಿಫಾರಸ್ಸಿನಂತೆ ರಸಗೊಬ್ಬರಗಳನ್ನು ಬಳಕೆ ಮಾಡಲು ಶಿಫಾರಸ್ಸು ಮಾಡಲಾಗುತ್ತಿದೆ. ಕೇಂದ್ರ ಸರ್ಕಾರದನ್ವಯ ಸಾರಜನಕ, ರಂಜಕ ಹಾಗು ಪೊಟ್ಯಾಷ್ ರಸಗೊಬ್ಬರಗಳ ಬಳಕೆ ಪ್ರಮಾಣವು 4:2:1 ಅನುಪಾತದಲ್ಲಿದ್ದರೆ ಅದನ್ನು ಸಮತೋಲನ ರಸಗೊಬ್ಬರ ಬಳಕೆ ಪ್ರಮಾಣ ಎಂದು ಗುರುತಿಸಲಾಗಿದೆ. ಅದರಂತೆ ರಾಜ್ಯದಲ್ಲಿ ಒಟ್ಟಾರೆ ಸಾರಜನಕ, ರಂಜಕ ಹಾಗು ಪೊಟ್ಯಾಷ್ ಬಳಕೆಯ ಪ್ರಮಾಣವು 3.32:1.94:1.00 ಅನುಪಾತದಲ್ಲಿದ್ದು ಮಿತಿಯಲ್ಲಿಯೇ ಬಳಕೆಯಾಗುತ್ತಿರುತ್ತದೆ. ಆದರೆ ಕೆಲವು ಜಿಲ್ಲೆಗಳಲ್ಲಿ ಮಾತ್ರ ನೀರಾವರಿ ಪ್ರದೇಶಗಳಲ್ಲಿ ಹೆಚ್ಚಿನ ಇಳುವರಿ ಪಡೆಯುವ ಉದ್ದೇಶದಿಂದ ಶಿಫಾರಸ್ಸಿನ ಪ್ರಮಾಣಕ್ಕಿಂತ ಹೆಚ್ಚು ರಸಗೊಬ್ಬರಗಳನ್ನು ಬಳಸಲಾಗುತ್ತಿದೆ.<br><br>ಅಂತಹ ಕೆಲವು ಭಾಗಗಳಲ್ಲಿ ಕೃಷಿ ಭೂಮಿಯ ಫಲವತತ್ತತೆ ಹಾಳಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ) | ರಾಸಾಯನಿಕ ಮುಕ್ತ ಕೃಷಿ ಮಾಡಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು;(ಸಂಪೂರ್ಣ ವಿವರ ಒದಗಿಸುವುದು) | ರಾಸಾಯನಿಕ ಮುಕ್ತ ಕೃಷಿ ಮಾಡುವ ನಿಟ್ಟಿನಲ್ಲಿ ರಾಜ್ಯ ಸರ್ಕಾರವು ದೇಶದಲ್ಲಿಯೇ ಪ್ರಪ್ರಥಮ ಬಾರಿಗೆ 2004 ರಲ್ಲಿಯೇ ಸಾವಯವ ಕೃಷಿ ನೀತಿಯನ್ನು ಹೊರತಂದು ನೀತಿಯಡಿ ಹಲವಾರು ಸಾವಯವ ಕೃಷಿ ಉತ್ತೇಜನ ಕಾರ್ಯಕ್ರಮಗಳನ್ನು ಪ್ರಾರಂಭಿಸಿ ಜೀವ ವೈವಿಧ್ಯತೆ ಸಂರಕ್ಷಣೆ, ಮಿಶ್ರಬೇಸಾಯ, ಮಣ್ಣು ಮತ್ತು ನೀರಿನ ಸಂರಕ್ಷಣೆ, ಸ್ಥಳೀಯವಾಗಿ ಸಾವಯವ ಗೊಬ್ಬರ ಉತ್ಪಾದನೆ, ಸಾವಯವ ಪ್ರಮಾಣೀಕರಣಕ್ಕೆ ನೆರವು ಇತ್ಯಾದಿ ಒಳಗೊಂಡಂತೆ ಸಾವಯವ ಕೃಷಿ ಪದ್ಧತಿಯು ಅತ್ಯುತ್ತಮ ಸುಸ್ಥಿರ ಪದ್ಧತಿಯೆಂದು ಮನವರಿಕೆ ಮಾಡುವ ಹಲವಾರು ಕಾರ್ಯಕ್ರಮಗಳನ್ನು ಬೃಹತ್ ಮಟ್ಟದಲ್ಲಿ ಹಮ್ಮಿಕೊಳ್ಳಲಾಗಿರುತ್ತದೆ. ಇದರ ಫಲಶ್ರುತಿಯಾಗಿ ರಾಜ್ಯದಲ್ಲಿ 2004 ರಲ್ಲಿ 2500 ಹೆಕ್ಟೇರ್ ಗಳಷ್ಟಿದ್ದ ಪ್ರಮಾಣಿಕೃತ ಸಾವಯವ ಕೃಷಿ ಪ್ರದೇಶವು 2021 ರ ಅಂತ್ಯಕ್ಕೆ 209400 ಹೆಕ್ಟೇರ್ ಗಳಷ್ಟಾಗಿರುತ್ತದೆ. |

| | | |
|---|---|---|
| | | ಕೃಷಿ ಭೂಮಿಯ ಫಲವತ್ತತೆಯನ್ನು ಹೆಚ್ಚಿಸಲು ಇಲಾಖೆಯ ವಿವಿಧ ಕಾರ್ಯಕ್ರಮಗಳಡಿ ರಿಯಾಯಿತಿ ದರದಲ್ಲಿ ಹಸಿರೆಲೆಗೊಬ್ಬರ ಬೀಜ, ಜೈವಿಕ ಗೊಬ್ಬರಗಳು, ಎರೆಗೊಬ್ಬರ, ಕಾಂಪೋಸ್ಟ್ ನಂತಹ ಸಾವಯವ ಗೊಬ್ಬರಗಳನ್ನು ಸಹ ರೈತ ಸಂಪರ್ಕ ಕೇಂದ್ರದ ಮೂಲಕ ರೈತರಿಗೆ ವಿತರಣೆ ಮಾಡಲಾಗುತ್ತಿದೆ. ಸಾವಯವ ಕೃಷಿಯತ್ತ ರೈತರಿಗೆ ಮನವರಿಕೆ ಮಾಡಿಕೊಳ್ಳಲು ಗ್ರಾಮ ಮಟ್ಟದಲ್ಲಿ ತರಬೇತಿಗಳನ್ನು ಆಯೋಜಿಸಲಾಗಿದೆ. |
| ಇ) | ಅತಿಯಾದ ರಾಸಾಯನಿಕ ಬಳಕೆ ಹಾಗೂ ನೀರು ಬಳಕೆಯಿಂದ ಎಷ್ಟು ಎಕರೆ ಭೂಮಿ ಸವಳು ಜವಳು ಆಗಿರುತ್ತದೆ;(ವಿವರ ನೀಡುವುದು) | ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ, ಬೆಂಗಳೂರು ಇವರಿಂದ ಪಡೆಯಲಾಗಿರುವ ಮಾಹಿತಿಯನ್ವಯ ರಾಜ್ಯದಲ್ಲಿ 41816.80 ಹೆಕ್ಟೇರ್ ಪ್ರದೇಶವು ಸವಳು-ಜವಳು ಪ್ರದೇಶವಾಗಿರುತ್ತದೆ.<br><br>ಜಿಲ್ಲಾವಾರು ತಾಲ್ಲೂಕುವಾರು ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |

ಸಂಖ್ಯೆ: AGRI-ACT/48/2022

(ಬಿ.ಸಿ. ಪಾಟೀಲ್)
ಕೃಷಿ ಸಚಿವರು

ಅನುಬಂಧ

ಜಿಲ್ಲಾವಾರು ಮತ್ತು ತಾಲ್ಲೂಕುವಾರು ಸವಳು- ಜವಳು ಪ್ರದೇಶದ ವಿವರ (ಹೆಕ್ಟೇರ್ ಗಳಲ್ಲಿ ) (Generated using IRS-RS2 USS-III Satellite Images )

| ಕ್ರ.ಸಂ | ಜಿಲ್ಲೆ | ತಾಲ್ಲೂಕು | ಕ್ಷೇತ್ರ (ಹೆ) |
|---|---|---|---|
| 1 | ಬಾಗಲಕೋಟೆ | ಜಮಖಂಡಿ | 665.2 |
| 2 | | ಬೀಳಗಿ | 103.5 |
| 3 | | ಬಾದಾಮಿ | 42.3 |
| | ಒಟ್ಟು | | **810.9** |
| 4 | ಬಳ್ಳಾರಿ | ಹೊಸಪೇಟೆ | 242.5 |
| 5 | | ಬಳ್ಳಾರಿ | 269.4 |
| 6 | | ಸಂಡೂರು | 389.8 |
| 7 | | ಹಗರಿಬೊಮ್ಮನಹಳ್ಳಿ | 2258.6 |
| 8 | | ಹಡಗಲಿ | 802.6 |
| 9 | | ಕೂಡ್ಲಿಗಿ | 4831.2 |
| | ಒಟ್ಟು | | **8794.1** |
| 10 | ಬೆಳಗಾವಿ | ಅಥಣಿ | 1151.5 |
| 11 | | ಚಿಕ್ಕೋಡಿ | 72.5 |
| 12 | | ರಾಯಭಾಗ | 239.8 |
| 13 | | ಗೋಕಾಕ | 30.3 |
| 14 | | ರಾಮದುರ್ಗ | 44.8 |
| 15 | | ಸವದತ್ತಿ | 113.9 |
| | ಒಟ್ಟು | | **1652.9** |
| 16 | ಚಾಮರಾಜನಗರ | ಕೊಳ್ಳೇಗಾಲ | 219.4 |
| 17 | | ಚಾಮರಾಜನಗರ | 488.8 |
| 18 | | ಗುಂಡ್ಲುಪೇಟೆ | 380.1 |
| | ಒಟ್ಟು | | **1088.3** |
| 19 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | 79.9 |
| 20 | | ಚಿಂತಾಮಣಿ | 35.7 |
| 21 | | ಶಿಡ್ಲಘಟ್ಟ | 42.6 |
| | ಒಟ್ಟು | | **158.3** |
| 23 | ಚಿಕ್ಕಮಗಳೂರು | ಕಡೂರು | 39.0 |
| | ಒಟ್ಟು | | **39.0** |
| 24 | ಚಿತ್ರದುರ್ಗ | ಮೊಳಕಾಲ್ಮೂರು | 1640.6 |
| 25 | | ಚಳ್ಳಕೆರೆ | 3427.3 |
| 26 | | ಚಿತ್ರದುರ್ಗ | 245.5 |
| 27 | | ಹೊಳಲ್ಕೆರೆ | 431.6 |
| 28 | | ಹಿರಿಯೂರು | 702.8 |
| 29 | | ಹೊಸದುರ್ಗ | 3628.2 |
| | ಒಟ್ಟು | | **10076.1** |
| 30 | ದಾವಣಗೆರೆ | ಹರಪನಹಳ್ಳಿ | 3065.9 |
| 31 | | ಜಗಳೂರು | 1760.2 |
| 32 | | ಹರಿಹರ | 0.0 |
| 33 | | ದಾವಣಗೆರೆ | 221.2 |
| | ಒಟ್ಟು | | **5047.3** |

ಜಿಲ್ಲಾವಾರು ಮತ್ತು ತಾಲ್ಲೂಕುವಾರು ಸವಳು- ಜವಳು ಪ್ರದೇಶದ ವಿವರ (ಹೆಕ್ಟೇರ್ ಗಳಲ್ಲಿ) (Generated using IRS-RS2 LISS-III Satellite Images)

| ಕ್ರ.ಸಂ | ಜಿಲ್ಲೆ | ತಾಲ್ಲೂಕು | ಕ್ಷೇತ್ರ (ಹೆ) |
|---|---|---|---|
| 34 | ಹಾಸನ | ಹೊಳೆನರಸೀಪುರ | 38.0 |
| | **ಒಟ್ಟು** | | **38.0** |
| 35 | ಕೋಲಾರ | ಶ್ರೀನಿವಾಸಪುರ | 17.7 |
| | **ಒಟ್ಟು** | | **17.7** |
| 36 | ಕೊಪ್ಪಳ | ಕುಷ್ಟಗಿ | 1670.3 |
| 37 | | ಯಲಬುರ್ಗ | 2101.5 |
| 38 | | ಗಂಗಾವತಿ | 163.0 |
| 39 | | ಕೊಪ್ಪಳ | 159.8 |
| | **ಒಟ್ಟು** | | **4094.7** |
| 40 | ಮಂಡ್ಯ | ನಾಗಮಂಗಲ | 0.4 |
| | **ಒಟ್ಟು** | | **0.4** |
| 41 | ಮೈಸೂರು | ನಂಜನಗೂಡು | 151.0 |
| | **ಒಟ್ಟು** | | **151.0** |
| 42 | ರಾಯಚೂರು | ದೇವದುರ್ಗ | 607.7 |
| 43 | | ರಾಯಚೂರು | 82.4 |
| 44 | | ಲಿಂಗಸುಗೂರು | 2717.8 |
| 45 | | ಮಾನ್ವಿ | 961.7 |
| 46 | | ಸಿಂಧನೂರು | 723.6 |
| | **ಒಟ್ಟು** | | **5093.3** |
| 47 | ತುಮಕೂರು | ಪಾವಗಡ | 842.7 |
| 48 | | ಸಿರಾ | 741.6 |
| 49 | | ಮಧುಗಿರಿ | 171.1 |
| 50 | | ಚಿಕ್ಕನಾಯಕನಹಳ್ಳಿ | 225.0 |
| 51 | | ಕೊರಟಗೆರೆ | 29.2 |
| 52 | | ಗುಬ್ಬಿ | 34.1 |
| 53 | | ತುಮಕೂರು | 39.4 |
| 54 | | ತಿಪಟೂರು | 95.2 |
| 55 | | ತುರುವೇಕೆರೆ | 52.7 |
| 56 | | ಕುಣಿಗಲ್ | 20.0 |
| | **ಒಟ್ಟು** | | **2250.9** |
| 57 | ವಿಜಯಪುರ | ಸಿಂದಗಿ | 173.4 |
| 58 | | ಮುದ್ದೆಬಿಹಾಳ | 70.9 |
| | **ಒಟ್ಟು** | | **244.3** |
| 59 | ಯಾದಗಿರಿ | ಯಾದಗಿರಿ | 71.0 |
| 60 | | ಶಹಾಪುರ | 961.1 |
| 61 | | ಶೋರಪುರ | 1227.3 |
| | **ಒಟ್ಟು** | | **2259.4** |
| | | ಮಹಾಒಟ್ಟು | **41816.8** |

ಮಾಹಿತಿಯನ್ನು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ, ಬೆಂಗಳೂರು ಇವರಿಂದ ಪಡೆಯಲಾಗಿದೆ.